

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1362(1597)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಹೆಚ್. ಎಂ. ರಮೇಶಗೌಡ(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : ಸರ್ಕಾರಿ ನೌಕರರ ಮುಂಬಡ್ತಿ ಕುರಿತು

(ಅ) ರಾಜ್ಯದಲ್ಲಿ ಒಟ್ಟು ಎಷ್ಟು ಜನ ಸರ್ಕಾರಿ ನೌಕರರು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಅಡಿಯಲ್ಲಿ ಮೂಲ ವೃಂದದಿಂದ ಹೈದ್ರಾಬಾದ್-ಕರ್ನಾಟಕ ಸ್ಥಳೀಯ ವೃಂದದಲ್ಲಿ ಗುರುತಿಸಿಕೊಂಡಿರುತ್ತಾರೆ; (ಇಲಾಖೆವಾರು ಮಾಹಿತಿ ನೀಡುವುದು)

(ಆ) ಸದರಿ ಆದೇಶದನ್ವಯ ಮುಂಬಡ್ತಿ ನೀಡುವಾಗ ನಿಗದಿಪಡಿಸಿರುವ ಪ್ರಮಾಣ ಎಷ್ಟು; ಅನುಸರಿಸುತ್ತಿರುವ ಮಾನದಂಡಗಳೇನು; ನಿಗದಿಪಡಿಸಿರುವ ಈ ಪ್ರಮಾಣದಷ್ಟು ಹುದ್ದೆಗಳು ಎಲ್ಲಾ ಇಲಾಖೆಗಳಲ್ಲಿ ಭರ್ತಿಯಾಗಿವೆಯೇ; (ಸಂಪೂರ್ಣ ವಿವರ ನೀಡುವುದು)

(ಇ) ಕೆಲವು ಇಲಾಖೆಗಳಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ಮೀಸಲಾದ ಹುದ್ದೆಗಳ ಪೈಕಿ ಮೇಲಿನ ಹಂತದಲ್ಲಿ ಹುದ್ದೆಗಳು ಖಾಲಿ ಇದ್ದರೂ ಕೆಳಗಿನ ಹಂತದಲ್ಲಿನ ನೌಕರರು Stagnant ಆಗುವ (ಮುಂಬಡ್ತಿಗೆ ಅರ್ಹತೆ ಹೊಂದಿಲ್ಲದೆ ನಿವೃತ್ತಿವರೆಗೂ ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಲ್ಲಿಯೇ ಉಳಿಯುವ) ಕಾರಣದಿಂದ ಕೆಳ ಹಂತದಲ್ಲಿ ಮುಂಬಡ್ತಿಗೆ ಅರ್ಹತೆ ಇದ್ದರೂ, ಮುಂಬಡ್ತಿಯಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಬಂದಿದ್ದಲ್ಲಿ, ಈ ವಿಚಾರದಲ್ಲಿ ಇಲಾಖಾವಾರು ಪರಿಶೀಲನೆ ನಡೆಸಲಾಗಿದೆಯೇ; ದೂರುಗಳು ಬಂದಿವೆಯೇ; ಈ ಸಮಸ್ಯೆಗೆ ಪರಿಹಾರವೇನು;

(ಉ) ಈ ರೀತಿ ಪರಿಸ್ಥಿತಿ ಉದ್ಭವವಾದಂತಹ ಸಂದರ್ಭದಲ್ಲಿ ಮುಂಬಡ್ತಿಯಿಂದ ವಂಚಿತರಾಗುವ ನೌಕರರಿಗೆ ಮುಂಬಡ್ತಿಯಿಂದ ವಂಚಿತರಾಗುವುದನ್ನು ತಪ್ಪಿಸುವ ದೃಷ್ಟಿಯಿಂದ ಮೇಲಿನ ಹಂತದಲ್ಲಿ ಖಾಲಿ ಇರುವ ಹುದ್ದೆಗಳನ್ನು ನಿಮ್ನೀಕರಿಸಿ, ಕೆಳಗಿನ ಹಂತದ ನೌಕರರಿಗೆ ಮುಂಬಡ್ತಿ ನೀಡುವ ಕುರಿತು ಸರ್ಕಾರ ಕ್ರಮ ಕೈಗೊಳ್ಳುವುದೇ; ಈ ನಿಟ್ಟಿನಲ್ಲಿ ಅಗತ್ಯ ಆದೇಶ ಯಾವ ಕಾಲಮಿತಿಯಲ್ಲಿ ಹೊರಡಿಸಲಾಗುವುದು?